# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 687 |
| ಸದಸ್ಯರ ಹೆಸರು | : | ಶ್ರೀ ಅರುಣ ಶಹಾಪುರ |
| ಉತ್ತರಿಸಬೇಕಾದ ದಿನಾಂಕ | : | 17-12-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ನಿರ್ದೇಶನಾಲಯ ಮಾಡುವ ಕುರಿತು ಇಲಾಖೆಯ ಸ್ಪಷ್ಟ ನೀಲುವೇನು; | ಸರ್ಕಾರದ ಆದೇಶ ಸಂಖ್ಯೆ: ಸಕಇ 532 ಎಸ್ಇಡಬ್ಲ್ಯೂ 96, ದಿನಾಂಕ: 06-10-1999ರಲ್ಲಿ ಕರ್ನಾಟಕ ರಾಜ್ಯದ ಗ್ರಾಮೀಣ ಪ್ರತಿಭಾನ್ವಿತ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಗುಣಮಟ್ಟ ಶಿಕ್ಷಣ ನೀಡಲು ಜವಹರ್ ನವೋದಯ ವಸತಿ ಶಾಲೆಗಳ ಮಾದರಿಯಲ್ಲಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಹಾಗೂ ಸಮಾಜ ಕಲ್ಯಾಣ, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆಗಳ ಅಧೀನದ ವಸತಿ ಶಾಲೆಗಳನ್ನು ಒಂದೇ ಸೂರಿನಡಿ ನಿರ್ವಹಿಸಲು ಸದರಿ ಶಾಲೆಗಳನ್ನು ವರ್ಗಾಯಿಸಿ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ಸ್ಥಾಪಿಸಿ ಆದೇಶಿಸಿದೆ.<br><br>ಪ್ರಾರಂಭದಲ್ಲಿ ವಿವಿಧ ಇಲಾಖೆಗಳ ಒಟ್ಟು 116 ವಸತಿ ಶಾಲೆಗಳು ಸಂಘಕ್ಕೆ ವರ್ಗಾವಣೆಯಾಗಿದ್ದು, ತದನಂತರ ಸರ್ಕಾರದ ಆದೇಶಗಳನ್ವಯ ವರ್ಷಾನುವರ್ಷ ವಸತಿ ಶಾಲೆ/ಕಾಲೇಜುಗಳು ಮಂಜೂರಾಗಿದ್ದು, ಪ್ರಸ್ತುತ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗಗಳ ಒಟ್ಟು 826 (ಪರಿಶಿಷ್ಟ ಜಾತಿ 503, ಪರಿಶಿಷ್ಟ ವರ್ಗ-156, ಹಿಂದುಳಿದ ವರ್ಗ-167). ವಸತಿ ಶಾಲೆ/ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ. ಸದರಿ ವಸತಿ ಶಾಲೆ/ಕಾಲೇಜುಗಳಲ್ಲಿ 2.13 ಲಕ್ಷ ವಿದ್ಯಾರ್ಥಿಗಳು ವ್ಯಾಸಂಗ ಮಾಡುವ ಅವಕಾಶ ಕಲ್ಪಿಸಲಾಗಿದೆ.<br><br>ಮೇಲ್ಕಂಡ ವಸತಿ ಶಾಲೆ/ಕಾಲೇಜುಗಳ ಸಮರ್ಪಕ ನಿರ್ವಹಣೆ ಹಾಗೂ ವಸತಿ ಶಾಲೆ/ ಕಾಲೇಜುಗಳ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಎಲ್ಲಾ ರೀತಿಯ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸಂಘವು ಶ್ರಮಿಸುತ್ತಿದೆ. |
| ಆ) | ನಿರ್ದೇಶನಾಲಯ ಮಾಡಲು ಇರುವ ಸಮಸ್ಯೇಗಳೇನು; ಈ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | |
| ಇ) | ನಿರ್ದೇಶನಾಲಯ ಸ್ಥಾಪಿಸುವಂತೆ ಹಲವು ವರ್ಷಗಳಿಂದ ಬೇಡಿಕೆ ಇದ್ದರೂ ಈ ಕುರಿತು ಯಾವುದೇ ನಿರ್ಧಾರಗಳನ್ನು ಕೈಗೊಳ್ಳದಿರಲು ಕಾರಣಗಳೇನು; | |
| ಈ) | ಈ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿಕೊಂಡು ನಿರ್ದೇಶನಾಲಯ ಮಾಡಲು ಕ್ರಮವಹಿಸಲಾಗುವುದೇ; ಪ್ರಸ್ತಾವನೆಯ ವಿವರವನ್ನು ಒದಗಿಸುವುದು) | |

| | | |
|---|---|---|
| | | 2020-21 ನೇ ಸಾಲಿನಲ್ಲಿ ಕೊರೋನಾ ಸೋಂಕಿನ ನಡುವೆಯೂ ರಾಜ್ಯದ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಎಸ್.ಎಸ್.ಎಲ್.ಸಿ ಫಲಿತಾಂಶವು ಅತ್ಯುತ್ತಮವಾಗಿ ಬಂದಿದೆ. ಸಂಘದ ವ್ಯಾಪ್ತಿಯ ಎಸ್.ಎಸ್.ಎಲ್.ಸಿ ಹೊಂದಿದ 494 ವಸತಿ ಶಾಲೆಗಳ 22470 ವಿದ್ಯಾರ್ಥಿಗಳು ಪರೀಕ್ಷೆಗೆ ಹಾಜರಾಗಿದ್ದು, ಒಟ್ಟಾರೆ 22470 ಉತ್ತೀರ್ಣರಾಗಿದ್ದಾರೆ. ಒಟ್ಟು ಫಲಿತಾಂಶ ಶೇ.100 ರಷ್ಟಿದೆ.<br><br>ಈ ಪೈಕಿ 21922 (ಶೇ.97.5) ವಿದ್ಯಾರ್ಥಿಗಳು ಡಿಸ್ಟಿಂಗ್ಷನ್ ಮತ್ತು ಪ್ರಥಮ ದರ್ಜೆ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದಾರೆ. ಎಲ್ಲಾ 494 ವಸತಿ ಶಾಲೆಗಳು ಶೇ. 100 ರಷ್ಟು ಫಲಿತಾಂಶ ದಾಖಲಿಸಿದೆ ಹಾಗೂ "ಎ" ಶ್ರೇಣಿಯಲ್ಲಿವೆ.<br><br>2020-21 ನೇ ಸಾಲಿನಲ್ಲಿ ದ್ವಿತೀಯ ಪಿ.ಯು.ಸಿ ಪರೀಕ್ಷೆಗೆ 3595 ವಿದ್ಯಾರ್ಥಿಗಳು ಹಾಜರಾಗಿದ್ದು, ಎಲ್ಲಾ 3595 ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ. ಒಟ್ಟು ಫಲಿತಾಂಶ ಶೇ.100 ರಷ್ಟಿದೆ.<br><br>2021-22ನೇ ಸಾಲಿನಲ್ಲಿ 140 ವಿದ್ಯಾರ್ಥಿಗಳು JEE Mains ನಲ್ಲಿ ಹಾಗೂ 03 ವಿದ್ಯಾರ್ಥಿಗಳು JEE Advance ನಲ್ಲಿ ಅರ್ಹತೆ ಹೊಂದಿರುತ್ತಾರೆ. ಇಲ್ಲಿಯವರೆಗೂ ಇವರ ಪೈಕಿ 17 ವಿದ್ಯಾರ್ಥಿಗಳು ದೇಶದ ಪ್ರತಿಷ್ಠಿತ ಸಂಸ್ಥೆಗಳಾದ IIT, NIT, IIIT, GFTI ಗಳಲ್ಲಿ ಸ್ಥಾನ ಪಡೆದಿರುತ್ತಾರೆ. 144 ವಿದ್ಯಾರ್ಥಿಗಳು NEET ಪರೀಕ್ಷೆಯಲ್ಲಿ ಅರ್ಹತೆ ಹೊಂದಿರುತ್ತಾರೆ.<br><br>ವಸತಿ ಶಾಲಾ/ಕಾಲೇಜುಗಳ ನಿರ್ವಹಣೆ ಮತ್ತು ಶೈಕ್ಷಣಿಕ ಗುಣಮಟ್ಟ ಹೆಚ್ಚಿಸಲು ಕೈಗೊಂಡ ಕ್ರಮಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.<br><br>ಸಂಘದ ವ್ಯಾಪ್ತಿಯ ಖಾಯಂ ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೈದ್ಯಕೀಯ ವೆಚ್ಚ ಮರುಪಾವತಿ, ಕಾಲಕಾಲಕ್ಕೆ ಸರ್ಕಾರದಿಂದ ನಿಗಧಿಪಡಿಸಿದ ವೇತನ ಶ್ರೇಣಿಯಂತೆ ವೇತನ ಬಡ್ತಿ ಹಾಗೂ ವೇತನ ಶ್ರೇಣಿ, ಗಳಿಕೆ ರಜೆ |

| | | |
|---|---|---|
| | | ನಗದೀಕರಣ ಸೌಲಭ್ಯ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದ್ಯಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿರುತ್ತದೆ.<br><br>ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ವರ್ಗಗಳ ಇಲಾಖೆಗಳ ಎಲ್ಲಾ ವಸತಿ ಶಾಲೆಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು ನಿರ್ದೇಶನಾಲಯವನ್ನಾಗಿ ಮಾರ್ಪಡಿಸುವ ಅವಶ್ಯಕತೆ ಕಂಡುಬರುವುದಿಲ್ಲ. |

**ಸಂಖ್ಯೆ: ಸಕಇ 545 ಮೊದೇಶಾ 2021**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು